


ನಿಸಾರ್ ಸಖಾಫಿ ಅಲ್ ಅಝ್ಹರಿ, ಉಳ್ಳಾಲ

ಈ ಗ್ರಂಥವು ಇಸ್ಲಾಮಿಕ್ ಎಜುಕೇಶನಲ್ ಬೋರ್ಡ್ ಒಫ್ ಇಂಡಿಯಾ ದ ನಾಲ್ಕನೇ ತರಗತಿ, ಐದನೇ ತರಗತಿ, ಅದೇ ರೀತಿ ಮುಖ್ತಸರುಲ್ ಬಯಾನ್ ಫೀ ತಜ್ವೀದಿಲ್ ಖುರ್ ಆನ್ ಹಾಗೂ ತದ್ ರೀಬುಲ್ ಖೀರಾಅಃ ದ ಆಯ್ದ ಭಾಗವನ್ನು ಅವಲಂಭಿಸಿ ರಚಿಸಲ್ಪಟ್ಟ ದ್ದಾಗಿದೆ.

ಸೂಚನೆ: ತಜ್ವೀದ್ ಶಾಸ್ತ್ರವು ಕೇವಲ ತಜ್ವೀದ್ ನ ನಿಯಮಗಳನ್ನು ಪುಸ್ತಕದ ಮೂಲಕ ಓದಿ ಕಲಿಯುವುದರಿಂದ ಅರ್ಥೈಸಲು ಸಾಧ್ಯವಿಲ್ಲ. ಅದು ನಿಯಮವರಿತ ಉಸ್ತಾದರ ಮುಂದೆ ಕೂತು ಕಲಿಯಬೇಕಾಗಿದೆ. ಅಲ್ಲಾಹನು ಕಲಿಯಲು ಕಲಿಸಲು ತೌಫೀಖ್ ನೀಡಲಿ..ಈ ಸತ್ಕಾರ್ಯವನ್ನು ಅಲ್ಲಾಹನು ಸ್ವೀಕರಿಸಲಿ...ಆಮೀನ್ ಯಾ ರಬ್ಬಲ್ ಆಲಮೀನ್..

# ಒಳ ಪುಟದಲ್ಲಿದೆ

# ಖುರ್ ಆನ್ ಪಾರಾಯಣ ಹಾಗೂ ಶಿಷ್ಟಾಚಾರ

ಅಲ್ಲಾಹು ಅವನ ಮುರ್ಸಲುಗಳಿಗೆ ಅವತೀರ್ಣ ಗೊಳಿಸಿದ ಗ್ರಂಥ ಗಳ ಪೈಕಿ ಅತೀ ಶ್ರೇಷ್ಟ ವಾದುದು ಪರಿಶುದ್ಧ ಖುರ್ ಆನ್ ಆಗಿದೆ. ಅದಕ್ಕೆ ಅದರದ್ದೆ ಆದ ಗೌರವ ಹಾಗೂ ಅದಬ್ ಇದೆ.

ಖುರ್ ಆನ್ ಪಾರಾಯಣವು ಅತಿ ಪುಣಕರವಾದ ಆರಾಧನೆ.

ಇಬ್ನು ಮಸ್ ಊದ್ ರಳಿಯಲ್ಲಾಹು ಅನ್ಹು ರವರಿಂದ ವರದಿ: ನಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರು ಹೇಳುತ್ತಾರೆ: "ಯಾರಾದರೂ ಖುರ್ ಆನಿನ ಒಂದು ಅಕ್ಷರ ವನ್ನು ಪಾರಾಯಣ ಮಾಡಿದರೆ ಅವನಿಗೆ ಒಂದು 'ಹಸನತ್' ಅನ್ನು ಅಲ್ಲಾಹನು ನೀಡುತ್ತಾನೆ. 'ಹಸನತ್' ಅನ್ನು ಅಲ್ಲಾಹನು ಹತ್ತು ಪಟ್ಟು ಜಾಸ್ತಿ ಗೊಳಿಸುವನು. ಅಲಿಫ್ ಲಾಂ ಮೀಮ್ ಇವುಗಳು ಒಟ್ಟಿಗೆ ಒಂದು ಅಕ್ಷರ ಎಂದು ನಾನು ಹೇಳುತ್ತಿಲ್ಲ. ಬದಲಾಗಿ ಅಲಿಫ್ ಒಂದಕ್ಷರವೂ, ಲಾಮ್ ಒಂದಕ್ಷರವೂ, ಮೀಮ್ ಒಂದಕ್ಷರವೂ ಆಗಿದೆ." (ಹದೀಸ್)

ಕೆಲವೊಂದು ಪಾಲಿಸಬೇಕಾದ ನಿಯಮಗಳನ್ನು ನೋಡುವ:

1: ಹಲ್ಲುಜ್ಜಿ ಬಾಯಿ ಶುಚಿಗೊಳಿಸುವುದು.

2: ವುಝೂ ಇರುವುದು.

3: ಪಾರಾಯಣ ದ ವೇಳೆ ಖಿಬ್ಲಾದ ದಿಕ್ಕಿಗೆ ಮುಖ ಮಾಡುವುದು.

4: ಪಾರಾಯಣ ದ ವೇಳೆ ಉತ್ತಮ ವಸ್ತ್ರಗಳನ್ನು ಧರಿಸುವುದು.

5: ಪ್ರಾರಂಭದಲ್ಲಿ ಅಊದು...ಹೇಳುವುದು.

6: ಮುಸ್ಹಫನ್ನು ಶುದ್ಧಿ ಇರುವ ಎತ್ತರದ ಸ್ಥಳದಲ್ಲಿ ಇಡುವುದು.

7: ಅನಾವಶ್ಯಕ ಮಾತುಗಳನ್ನಾಡುವ ಸ್ಥಳಗಳಲ್ಲಿ ಖುರ್ ಆನ್ ಓದದಿರುವುದು.

8: ದೊಡ್ಡ ಗಾತ್ರದ ಮುಸ್ಹಫ್ ಉಪಯೋಗಿಸುವುದು.

9: ಪಾರಾಯಣ ದ ವೇಳೆ ಅತ್ಯಾವಶ್ಯಕವಾದ ಕಾರಣ ವಿಲ್ಲದೆ ಇನ್ನೊಬ್ಬರೊಂದಿಗೆ ಮಾತಾಡಲಿಕ್ಕೆ ಬೇಕಾಗಿ ಪಾರಾಯಣವನ್ನು ನಿಲ್ಲಿಸದಿರುವುದು.

10: ಮುಸ್ಹಫ್ ನಲ್ಲಿ ನೋಡಿ ಓದುವುದು.

11: ಸಜ್ದ ದ ಆಯತ್ ಓದಿದರೆ ಸುಜೂದ್ ಮಾಡುವುದು.

12: ರಹ್ಮತಿನ ಆಯತ್ ಓದಿದರೆ ರಹ್ಮತ್ ಬೇಡುವುದು.

13: ಅದ್ಹಾಬಿನ ಆಯತ್ ಓದಿದರೆ ರಕ್ಷಣೆ ಬೇಡುವುದು.

14: ಪಾರಾಯಣದ ವೇಳೆ ಆಕಳಿಕೆ ಬಂದರೆ ಅದು ಪೂರ್ಣವಾಗಿಯೂ ಹೋಗುವವರೆಗೂ ಪಾರಾಯಣ ನಿಲ್ಲಿಸುವುದು.

15: ತಜ್ವೀದ್ ನಿಯಮಗಳನ್ನು ಪಾಲಿಸುವುದು.

16: ಭಕ್ತಿ ಪೂರ್ವಕ, ಅರ್ಥ ಗ್ರಹಿಸಿ,ಉಚ್ಚಾರಣಾ ಶುದ್ಧಿ ಯೊಂದಿಗೆ ನಿಧಾನವಾಗಿ ಓದುವುದು.

17: ಪಾರಾಯಣ ನಿಲ್ಲಿಸಿದರೆ "ಸ್ವದಕಲ್ಲಾಹುಲ್ ಅಳೀಮ್" ಎಂದು ಹೇಳುವುದು.

18: ಖುರ್ ಆನ್ ಸಂಪೂರ್ಣ ಓದಿ ಮುಗಿಸಿದರೆ ಕುಟುಂಬದವರನ್ನು ಒಟ್ಟು ಸೇರಿಸಿ ಪ್ರಾರ್ಥಿಸುವುದು.

ಖುರ್ ಆನ್ ಅನ್ನು ಅರ್ಹ ರೀತಿಯಲ್ಲಿ ಪಠಿಸಲು ಅಲ್ಲಾಹು ನಮಗೆ ತೌಫೀಖ್ ನೀಡಲಿ - ಆಮೀನ್ ಯಾ ರಬ್ಬಲ್ ಅಲಮೀನ್

-------

# مخارج الحروف ಅಕ್ಷರಗಳ ಉಚ್ಚರಣಾ ಸ್ಥಳ

| | | | | | | | |
|---|---|---|---|---|---|---|---|
| د | خ | ح | ج | ث | ت | ب | ا |
| ط | ض | ص | ش | س | ز | ر | ذ |
| م | ل | ك | ق | ف | غ | ع | ظ |
| — | — | — | ي | لا | و | ه | ن |

**ಇವುಗಳಿಗೆ ಹಿಜಾಯೀ ಅಕ್ಷರ ಗಳೆಂದು ಹೆಸರು. ಇದರಲ್ಲಿ 29 ಅಕ್ಷರ ಗಳಿವೆ. ಪ್ರತಿ ಯೊಂದಕ್ಕೂ ಒಂದೊಂದು ಉಚ್ಚಾರಣಾ ಸ್ಥಳವಿದೆ. ಅಕ್ಷರ ಗಳ ಉಚ್ಚಾರಣಾ ಸ್ಥಾನಗಳಿಗೆ مَخرَجಎನ್ನುತ್ತೇವೆ. ಇದಕ್ಕೆ 17 ಉಚ್ಚಾರಣಾ ಸ್ಥಳಗಳಿವೆ. ಒಂದು ಉಚ್ಚಾರಣಾ ಸ್ಥಾನ ದಿಂದ ಒಂದಕ್ಕಿಂತಲೂ ಅಧಿಕ ಅಕ್ಷರ ಹೊರ ಹೊಮ್ಮುವುದರಿಂದಾಗಿದೆ ಅಕ್ಷರಗಳ ಸಂಖ್ಯೆ ಅನುಸರಿಸಿ ಉಚ್ಚಾರಣದ ಸಂಖ್ಯೆ ಇಲ್ಲದಿರುವುದು. ಅದೇ ರೀತಿ ಕೆಲವೊಂದು ಅಕ್ಷರಗಳಿಗೆ ಒಂದಕ್ಕಿಂತಲೂ ಅಧಿಕ مَخرَجಗಳಿವೆ.**

**ಈ ಅಡಿಸ್ತಾನದಲ್ಲಿ ಅಕ್ಷರಗಳ ಲೆಕ್ಕ 33 ರ ರಷ್ಟಿದೆ.**

**"ي" "و**

**ಇವೆರಡು ಮದ್ದ್ (ದೀರ್ಘ) ಅಕ್ಷರವಾಗುವಾಗ جَوف**

**(ಬಾಯಿಯ ತೆರೆದ ಭಾಗ) ನಿಂದಲೂ ಅಲ್ಲದ ಸಂದರ್ಭದಲ್ಲಿ "و"ತುಟಿಯಿಂದಲೂ, "ي"ನಾಲಗೆ ಯಿಂದಲೂ ಹೊರಬರುತ್ತದೆ.**

**"ن " " م**

**ಎಂಬ ಅಕ್ಷರಗಳನ್ನು )إخفَاءಅವ್ಯಕ್ತ ಗೊಳಿಸಿ ರಾಗ ನೀಡಲ್ಪಡುವಾಗ) ಗೊಳಿಸುವಾಗ ) خَيشومُಮೂಗಿನ ಅಂತರ್ ಭಾಗ) ನಿಂದಲೂ ಅಲ್ಲದ ಸಂಧರ್ಭ "م"ತುಟಿ ಯಿಂದಲೂ, "ن"ನಾಲಗೆ ಯಿಂದಲೂ ಹೊರ ಹೊಮ್ಮುತ್ತದೆ.**

ಪ್ರತಿ  مَخرَج ನಿಂದ ಉಚ್ಚರಿಸುವ ಅಕ್ಷರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

| | | مخرج<br>ಉಚ್ಚಾರಣಾ ಸ್ಥಳ) |
|---|---|---|
| 6 | ء ه ع ح غ خ | حلق |
| 18 | ت ث ج د ذ ر ز س ش ص ض ط ظ<br>ق ك ل ن ي | لسان<br>ನಾಲಗೆ |
| 4 | ب ف و م | شفة ತುಟಿ |
| 2 | م ن (غنة)<br>ಮೂಗಿನಿಂದ ಉಂಟಾಗುವ ರಾಗ | خَيشومُ<br>(ಮೂಗಿನ ಅಂತರ್<br>ಭಾಗ) |
| 3 | ا و ي(ದೀರ್ಘಾಕ್ಷರಗಳು) | جوف )<br>ಬಾಯಿಯ ತೆರೆದ |

-




ಗಂಟಲಿನಿಂದ ಹೊರ ಬರುವ ಅಕ್ಷರ:




"ه" "ء ಗಂಟಲಿನ ಕೆಳ ಭಾಗದಿಂದ ಹೊರ ಬರುವುದು.




"ح" "ع ಗಂಟಲಿನ ಮಧ್ಯ ಭಾಗದಿಂದ ಹೊರ ಬರುವುದು.




= "خ" "غ ಗಂಟಲಿನ ಮೇಲ್ಭಾಗದಿಂದ ಹೊರ ಬರುವುದು.




ن =

ತುದಿ ನಾಲಗೆ

ಹಾಗೂ

ಮುಂಭಾಗದ

ಹಲ್ಲಿನ ಒಸಡು.




ر =

ತುದಿ ನಾಲಗೆಯ ಮೇಲ್ಭಾಗ ಹಾಗೂ ಮುಂಭಾಗದ ಹಲ್ಲಿನ ಒಸಡುಗಳಿಗೆ




ط ” د “ ت “ =

ನಾಲಗೆಯ ತಲೆ ಹಾಗೂ ಮುಂಭಾಗದಲ್ಲಿರುವ ಹಲ್ಲುಗಳ ಬುಡ.



ق

اَقْ - اِقْ - اُقْ

= ق

**ನಾಲಗೆ ಯ ಬುಡ ಹಾಗೂ ಮೇಲ್ಭಾಗದಲ್ಲಿರುವ ಅಂಗುಳ (ಅಂಗುಳ ಅಂದರೆ: ಅನ್ನಾಕ್)**



ك

اَكْ - اِكْ - اُكْ

**“ق” = “ك“**

**ಎಂಬ ಅಕ್ಷರ ಬರುವ ಸ್ಥಳದಿಂದ ಸ್ವಲ್ಪ ಕೆಳ ಭಾಗ.**










**= “ي” “ش” “ج“**

**ನಾಲಗೆ ಯ ಮಧ್ಯ ಭಾಗ ಹಾಗೂ ಮೇಲ್ಭಾಗದಲ್ಲಿ ರುವ ಅಂಗುಳದಿಂದ.**




= "ض
ನಾಲಗೆಯ ಎರಡು
ಪಾರ್ಶ ಭಾಗಗಳು
ಹಾಗೂ ಮೇಲಿನ ದವಡೆ
ಹಲ್ಲುಗಳು.




ل =

ತುದಿ ನಾಲಗೆ ಯ ಪಾರ್ಶ ಭಾಗಗಳು ಹಾಗೂ ಮುಂಭಾಗದ ಹಲ್ಲಿನ ಒಸಡು ( ಹಲ್ಲುಗಳು ಉದ್ಭವವಾಗುವ ಸ್ಥಳ)




= "ف
ಕೆಳಗಿನ ತುಟಿ
ಹಾಗೂ ಮೇಲಿರುವ
ಮುಂಭಾಗದ
ಹಲ್ಲುಗಳ ತಲೆ.

## ಎರಡು ತುಟಿ ಗಳ ಎಡೆಯಿಂದ: “م” “ب” “و







ب =
ತುಟಿಗಳೆರಡನ್ನು
ಸ್ವಲ್ಪ ಒತ್ತ
(Strace)
ಬೇಕು.

---










م =
"ب "
ಉಚ್ಛರಿಸಲು
ಕೊಟ್ಟಷ್ಟು ಒತ್ತು
ಕೊಡಬೇಕೆಂದಿಲ್ಲ.

---

و =
ತುಟಿಗಳು
teach
ಆಗಲ್ಲ.







---

## = "س" "ز"

## ನಾಲಗೆ ಯ ತುದಿ ಹಾಗೂ ಮುಂಭಾಗದ ಎರಡು ಸಾಲಿನ ಹಲ್ಲುಗಳ ಎಡೆ.




"ص = ನಾಲಗೆ ಯ ತುದಿ ಹಾಗೂ ಮುಂಭಾಗದ ಎರಡು ಸಾಲಿನ ಹಲ್ಲುಗಳ ಎಡೆಯಿಂದ ತಫ್ ಖೀಮ್ ಆಗಿ ಉಚ್ಚಾರಿಸುವುದು.

ತಫ್ ಖೀಮ್:- ಅಕ್ಷರದ ಗಾತ್ರವನ್ನು ದೊಡ್ಡದಾಗಿಸಿ ಬಾಯಿ ತುಂಬಾ ಉಚ್ಚರಿಸುವುದು.

---

## = " ث " " ذ " " ظ

## ನಾಲಗೆಯ ತಲೆ ಹಾಗೂ ಮೇಲಿರುವ ಮುಂಭಾಗದ ಹಲ್ಲುಗಳ ತಲೆ.



# صفات الحروف

---

ಅಕ್ಷರದ ಉಚ್ಚಾರಣೆಯ ಕುರಿತು ಕಳೆದ ಪಾಠದಲ್ಲಿ ತಿಳಿದಿದ್ದೇವೆ. ಅಕ್ಷರಗಳಲ್ಲಿ ಪ್ರತಿಯೊಂದನ್ನೂ ಉಚ್ಚರಿಸುವಾಗ ಶಬ್ದದಲ್ಲಿ ವ್ಯಾತ್ಯಾಸ ಉಂಟಾಗುವುದನ್ನು ನಾವು ತಿಳಿಯಬಹುದು. ಇದಕ್ಕೆ ಅಕ್ಷರದ صِفَة ಎಂದು ಹೆಸರು. ಅಕ್ಷರ ಗಳನ್ನು ಅದರصِفَة ಪ್ರಕಾರ ಉಚ್ಚರಿಸಬೇಕು.

فَحَثَّهُ شَخص سكت

ಇದರಲ್ಲಿರುವ 10 ಅಕ್ಷರಗಳನ್ನು ಉಚ್ಚರಿಸಿ ನೋಡಿ. ಆಗ ಬಾಯಿಯಿಂದ ಗಾಳಿ ಹೊರ ಬರುವುದಿಲ್ಲವೇ..? ಇದಕ್ಕೆ هَمص ಎಂದು ಹೆಸರು. ಅದೇ ಪ್ರಕಾರ

خُصَّ ضغط قظ

ಏಳು ಅಕ್ಷರ ಗಳನ್ನು ಉಚ್ಚರಿಸುವಾಗ ನಾಲಗೆಯ ಬುಡ ಮೇಲ್ಭಾಗಕ್ಕೆ ಏರುತ್ತದೆ. ಇದಕ್ಕೆ إِستِعلاَء ಎನ್ನುತ್ತೇವೆ.

ص، ض، ط، ظ

ಇವುಗಳನ್ನು ಉಚ್ಚರಿಸುವಾಗ ನಾಲಗೆಯ ಮಧ್ಯ ಭಾಗ ಮೂರ್ಧಕ್ಕೆ ಸೇರುತ್ತದೆ.ಇದಕ್ಕೆ إِطبَاق ಎಂದು ಹೆಸರು.

قُطُب جَد

ಇದರಲ್ಲಿ ರುವ 5 ಅಕ್ಷರ ಗಳನ್ನು ಪ್ರತಿ ಕಂಪನದೊಂದಿಗೆ ಉಚ್ಚರಿಸಬೇಕು. ಇದಕ್ಕೆ قَلقَلَة ಎಂದು ಹೆಸರು.

هَمص، إِستِعلاَء، إِطبَاق، قَلقَلَة

ಇವು ಅಕ್ಷರಗಳ ಪ್ರಮುಖ ಸ್ವಿಫತುಗಳಾಗಿವೆ.

## احكام الميم الساكنة

# ಸುಕೂನ್ ಇರುವ ಮೀಮ್ ನ ವಿಧಿಗಳು:

**ಸುಕೂನ್ ಇರುವ ಮೀಮ್ ನ ನಂತರ ಅಕ್ಷರ ಗಳು ವ್ಯಾತ್ಯಾಸ ಹೊಂದುದರ ಮೂಲಕ ಓದುವಿಕೆ ವ್ಯಾತ್ಯಾಸ ಆಗುತ್ತದೆ.**

**ಇದರಲ್ಲಿ ಮೂರು ರೀತಿಯ ವ್ಯಾತ್ಯಾಸ ವನ್ನು ಕಾಣಬಹುದು:**

| 1: اِلادغام بغنة (ರಾಗದೊಂದಿಗೆ ವಿಲೀನ ಮಾಡುವುದು) | 2: اِلاخفاء (ಅವ್ಯಕ್ತ ಗೊಳಿಸಿ ರಾಗದೊಂದಿಗೆ ಓದುವುದು) | 3: اِظهار (ವ್ಯಕ್ತ ಪಡಿಸುವುದು) |
|---|---|---|

**ವಿವರಣೆ:** **1: اِلادغام بغنة**

**(ರಾಗದೊಂದಿಗೆ ವಿಲೀನ ಮಾಡುವುದು)**

**ಸುಕೂನ್ ಇರುವ ಮೀಮ್ ನ ನಂತರದ ಅಕ್ಷರ ಮೀಮ್ ಬಂದರೆ; ಈ ಎರಡು ಮೀಮ್ ಗಳನ್ನು ಒಂದು ಮೀಮ್ ಗಳನ್ನಾಗಿ ಮಾಡಿ ಸ್ವಲ್ಪ ಮೂಗನ್ನು ಉಪಯೋಗಿಸಿ ರಾಗದೊಂದಿ ಗೆ**

**ಉದಾ:-**

**ಇಲ್ಲಿ ಎರಡು ಮೀಮ್ ಗಳನ್ನು ವಿಲೀನ ಮಾಡಿ ರಾಗದೊಂದಿಗೆ ಉಚ್ಚರಿಸಬೇಕು.**

| |
|---|
| إِلاَّ وَأَنْتُم مُّسْلِمُونَ |
| وَلَكُمْ مَّا كَسَبْتُمْ |

## اِالاخفاء :

## (ಅವ್ಯಕ್ತ ಗೊಳಿಸಿ ರಾಗದೊಂದಿಗೆ ಓದುವುದು)

ಸುಕೂನ್ ಇರುವ ಮೀಮ್ ನ ನಂತರ ಬಾಅ್ (ب) ಎಂಬ ಅಕ್ಷರ ಬಂದರೆ; ಈ ಮೀಮನ್ನು ಸ್ವಲ್ಪ ಅವ್ಯಕ್ತ ಮಾಡಿ ಸ್ವಲ್ಪ ರಾಗದೊಂದಿಗೆ ಉಚ್ಚರಿಸಬೇಕು.

ಉದಾ:- تَرْمِيهِم بِحِجَارَةٍ يَعْتَصِمْ بِاللَّهِ

---

## اِظهار :

## (ವ್ಯಕ್ತಪಡಿಸುವುದು)

ಸುಕೂನ್ ಇರುವ ಮೀಮ್ ನ ನಂತರ ಮೀಮ್ ಹಾಗೂ ಬಾಅ್ (ب) ಅಲ್ಲದ ಯಾವುದೇ ಅಕ್ಷರ ಬಂದರೂ; ಆ ಅಕ್ಷರವನ್ನು ಅದೇ ರೀತಿಯಾಗಿ ಉಚ್ಚರಿಸಬೇಕು.

| | | | |
|---|---|---|---|
| ا | لَهُمْ أَجْرٌ غَيْرُ مَمْنُونٍ | د | لَهُمْ دَرَجَاتٌ |
| ت | أَنْعَمْتَ عَلَيْهِمْ | ذ | إِلَيْكُمْ ذِكْراً |
| ث | يُحْيِيكُمْ ثُمَّ إِلَيْهِ | ر | أَمْهِلْهُمْ رُوَيْداً |
| ج | رَسُولُ الله إِلَيْكُمْ جَمِيعاً | ز | إِلَّا رَمْزًا |

| | | | |
|---|---|---|---|
| ح | عَلَيْهِمْ حَافِظِينَ | س | إِلاَّ هَمْساً |
| خ | هُمْ خَيْرُ الْبَرِيَّةِ | ش | أَمْشَاجٍ |
| ص | كُنتُمْ صَارِمِينَ | ق | وَإِذَا رَأَوْهُمْ قَالُوا |
| ض | لَكُمْ ضَرّاً وَلاَ نَفْعاً | ك | إِنَّهُمْ كَانُواْ |
| ط | مَسَّهُمْ طَائِفٌ | ل | فَمَا لَهُمْ لاَ يُؤْمِنُونَ |
| ظ | ظَنَنْتُمْ ظَنَّ | ن | أَلَمْ نَجْعَلِ |
| ع | أَنذَرْنَاكُمْ عَذَاباً قَرِيباً | ه | أَمْ هُمْ قَوْمٌ طَاغُونَ |
| غ | فَإِنَّهُمْ غَيْرُ مَلُومِينَ | ي | وَإِذَا مَرُّواْ بِهِمْ يَتَغَامَزُونَ |

ಸೂಚನೆ: و ، ف ಎಂಬ ಅಕ್ಷರ ಗಳ ಜೊತೆ ಬರುವಾಗ ಪ್ರತ್ಯೇಕ ಕಾರಣ ف ، و ತುಟಿಯಕ್ಷರವಾದುದರಿದ ವ್ಯಕ್ತವಾಗಿ ಉಚ್ಚರಿಸಬೇಕು. ಇಲ್ಲಿ ಗಮನಿಸದಿದ್ದರೆ ಮೀಮ್ ನ ಉಚ್ಚಾರಣೆಯು ಅಸ್ಪಷ್ಟವಾಗುವ ಸಾಧ್ಯತೆಯಿದೆ.

★ ಮೀಮ್ ಹಾಗೂ ನೂನನ್ನು ಉಚ್ಚಾರಣೆ ಮಾಡುವಾಗ ಮೂಗನ್ನು ಒತ್ತಿ ಉಚ್ಚಾರಣೆ ಮಾಡಿದರೆ ಸಾಲದು. ಬದಲಾಗಿ ಅದನ್ನು ಮೂಗಿನ ಅಂತರ್ ಭಾಗದ ಮೂಲಕ ಉಚ್ಚಾರಣೆ ಮಾಡಬೇಕು.

★ ಶದ್ದ್ ಇರುವ ಎಲ್ಲಾ ಮೀಮ್ ಹಾಗೂ ನೂನನ್ನು ರಾಗದೊಂದಿಗೆ (ಮೂಗಿನ ಅಂತರ್ ಭಾಗದಿಂದ) ಉಚ್ಚಾರಣೆ ಮಾಡಬೇಕು. ಅದು ಎರಡು ಹರ್ಕತ್ ನ ಖದ್ರ್ ಆಗಿದೆ ರಾಗ ಬೇಕಾದದ್ದು.

---

# احكام النون الساكنة والتنوين

## ಸಾಕಿನಾದ ನೂನ್ ಮತ್ತು ತನ್ವೀನ್ ನ ವಿಧಿಗಳು:

**ಸಾಕಿನಾದ ನೂನ್ (ಸೂಕುನ್ ಇರುವ ನೂನ್) ಹಾಗೂ ತನ್ವೀನ್ ನ ನಂತರ ಅರಬಿ ಅಕ್ಷರಗಳು ಬದಲಾವಣೆ (ವ್ಯಾತ್ಯಾಸ) ಹೊಂದುದರ ಮೂಲಕ ನಮ್ಮ ಓದುವಿಕೆ ಬದಲಾಗುತ್ತದೆ.**

**ಇದು 5 ಶೈಲಿಯಲ್ಲಿ ಬದಲಾಗುತ್ತದೆ:**

| | |
|---|---|
| **1:** اِظهار<br>**(ವ್ಯಕ್ತಪಡಿಸುವುದು)** | **2:** اِلادغام بغنة<br>**(ರಾಗದೊಂದಿಗೆ ವಿಲೀನ ಮಾಡುವುದು)** |
| **3:** اِلادغام بلاغنة<br>**(ರಾಗರಹಿತ ವಿಲೀನ ಮಾಡುವುದು)** | **4:** اِلاقلاب<br>**(ಪರಿವರ್ತಿಸುವುದು)** |
| 5: اِلاخفاء<br>**(ಅವ್ಯಕ್ತ ಗೊಳಿಸಿ ರಾಗದೊಂದಿ ಗೆ ಓದುವುದು)** | |

# 1: اِظہار (ವ್ಯಕ್ತಪಡಿಸುವುದು)

## ಗಂಟಲಿನಿಂದ ಹೊರ ಬರುವಂತಹ ಅಕ್ಷರಗಳು

| | | | | | |
|---|---|---|---|---|---|
| ء | ه | ع | ح | غ | خ |

ಸೂಕೂನ್ ಇರುವ ನೂನಿನ ನಂತರ ಅದೇ ರೀತಿ ತನ್ವೀನ್ ٌ ً ٍ ನಂತರ ಬಂದರೆ; ಈ ಸೂಕೂನ್ ಇರುವ ನೂನನ್ನು ಹಾಗೂ ತನ್ವೀನ್ ಅನ್ನು ಅದೇ ರೀತಿ ಉಚ್ಚರಿಸಬೇಕು.

ಉದಾ:

| ತನ್ವೀನ್‌ನ ಉದಾಹರಣೆ | ಸುಕೂನ್ ಇರುವ ನೂನ್ | |
|---|---|---|
| كُفُواً أَحَدٌ | مَنْ آمَنَ | ء |
| سَلَامٌ هِيَ | يَنْهَوْنَ | ه |
| سَمِيعٌ عَلِيمٌ | أَنْعَمْتَ | ع |
| عَزِيزٌ حَكِيمٌ | مِنْ حَوْلِهِمْ | ح |
| لَهُمْ أَجْرٌ غَيْرُ مَمْنُونٍ | مِّنْ غِلٍّ | غ |
| لَطِيفٌ خَبِيرٌ | مَنْ خَافَ | خ |

## 2: اَلِادغام بغنة

## (ರಾಗದೊಂದಿಗೆ ವಿಲೀನ ಮಾಡುವುದು)

ಸುಕೂನ್ ಇರುವ ನೂನ್ ಹಾಗೂ ತನ್ವೀನ್ ನ ನಂತರ [ نومي ]ಈ ನಾಲ್ಕು ಅಕ್ಷರಗಳಲ್ಲಿ ಯಾವುದಾದರೂ ಒಂದು ಬಂದರೆ;

★ ಮೊದಲನೆಯದಾಗಿ (ವಿಲೀನ) ಮಾಡಬೇಕು. [ಅಂದರೆ: ಸುಕೂನ್ ಇರುವ ನೂನ್ ಹಾಗೂ ಅದರ ನಂತರ ಇರುವ ಅಕ್ಷರ...ಅದೇ ರೀತಿ.. ತನ್ವೀನ್ ಹಾಗೂ ಅದರ ನಂತರ ಇರುವ ಅಕ್ಷರ ವನ್ನು ವಿಲೀನಿಸಬೇಕು. (ಆಗ ಆ ಅಕ್ಷರ ಗಟ್ಟಿಯಾದ ಅಕ್ಷರವಾಗಿ ಮಾರ್ಪಾಡು ಆಗುವಂತಾಗಬೇಕು)]

★ ಅದರ ನಂತರ: ಮೂಗನ್ನು ಉಪಯೋಗಿಸಿ ಸ್ವಲ್ಪ ಗಣೆಕರಿಸಿ ಉಚ್ಚರಿಸಬೇಕು.

| ತನ್ವೀನ್‌ನ ಉದಾಹರಣೆ | ಸುಕೂನ್ ಇರುವ ನೂನ್ | |
|---|---|---|
| قَوْلٌ مَّعْرُوفٌ | مِن نِّعْمَةٍ تُجْزَى | ن |
| الَّذِي جَمَعَ مَالاً وَعَدَّدَهُ | عَنْ وَالِدِهِ | و |
| فِي إِمَامٍ مُبِينٍ | مِّن مَّآءٍ | م |
| وُجُوهٌ يَوْمَئِذٍ | فَمَن يَعْمَلْ | ي |

## Important point:

**ಸುಕೂನ್ ಇರುವ ನೂನಿನ ನಂತರ ಈ ನಾಲ್ಕು (نومي)ಅಕ್ಷರ ಗಳಲ್ಲಿ ಯಾವುದಾದರೂ ಒಂದು; ಒಂದೇ ಪದದಲ್ಲಿ ಬಂದರೆ ಅದಕ್ಕೆ ಈ ನಿಯಮವಿಲ್ಲ.**

| | |
|---|---|
| صِنْوَانٌ | الدُّنْيَا |
| قِنْوَانٌ | بُنْيَانٌ |

**ಉದಾ:**

**ಇಲ್ಲಿ ಒಂದೇ ಪದದಲ್ಲಿ ಬಂದಿದೆ.ಆದುದರಿಂದ ನಿಯಮ ಬಾಧಕವಲ್ಲ.**

---

## 3: اِلادغام بلاغنة

## (ರಾಗರಹಿತ ವಿಲೀನ ಮಾಡುವುದು)

**ಸುಕೂನ್ ಇರುವ ನೂನ್ ಹಾಗೂ ತನ್ವೀನ್ ನ ನಂತರ "ل" "ر"ಈ ಎರಡು ಅಕ್ಷರಗಳಲ್ಲಿ ಒಂದು ಬಂದರೆ:**

★ **ಆ ಸುಕೂನ್ ಇರುವ ನೂನ್ ಅಥವಾ ತನ್ವೀನ್ ಅನ್ನು ಅದರ ನಂತರ ಬಂದ "ر"ಅಥವಾ "ل"ಅಕ್ಷರ ವನ್ನು ಒಂದು ಅಕ್ಷರ ವನ್ನಾಗಿ ಮಾಡಿ ಉಚ್ಚರಿಸಲಾಗುವುದು.**

| ತನ್ವೀನ್‌ನ ಉದಾಹರಣೆ | ಸುಕೂನ್ ಇರುವ ನೂನ್ | |
|---|---|---|
| مُّحَمَّدٌ رَّسُولُ الله | أَنْ رَآهُ اسْتَغْنَى | ر |
| وَيْلٌ لِكُلِّ هُمَزَةٍ لُمَزَةٍ | وَلَمْ يَكُنْ لَهُ كُفُوًا أَحَدٌ | ل |

ಸುಕೂನ್ ಇರುವ ನೂನ್ ಉದಾಹರಣೆಯಲ್ಲಿ:

ಇಲ್ಲಿ ನೂನ್ ಮತ್ತು ر ಅನ್ನು ಸೇರಿಸಿ ಗಟ್ಟಿ ಇರುವ ಅಕ್ಷರವನ್ನಾಗಿ ಓದಬೇಕು.

ತನ್ವೀನ್‌ನ ಉದಾಹರಣೆ:-

ಇಲ್ಲಿ ತನ್ವೀನ್ ಅನ್ನು ಮತ್ತು ಅನ್ನು ಸೇರಿಸಿ ಗಟ್ಟಿ ಇರುವ ಅಕ್ಷರವನ್ನಾಗಿ

---

4: اِلاقلاب(ಪರಿವರ್ತಿಸುವುದು):-

ಸುಕೂನ್ ಇರುವ ನೂನ್ ಅಥವಾ ತನ್ವೀನ್ ನ ನಂತರ "ب"ಎಂಬ ಅಕ್ಷರ ಬಂದರೆ; ಸುಕೂನ್ ಇರುವ ನೂನ್ ಹಾಗೂ ತನ್ವೀನ್ ಅನ್ನು م" "ಆಗಿ ಪರಿವರ್ತಿಸಿ ...ಮೂಗನ್ನು ಉಪಯೋಗಿಸಿ ಗಣಿಕರಿಸಿ ಉಚ್ಚರಿಸಬೇಕು.

| ತನ್ವೀನ್‌ನ ಉದಾಹರಣೆ | ಸುಕೂನ್ ಇರುವ ನೂನ್ | |
|---|---|---|
| سَمِيعٌ بَصِيرٌ | أَنْبِيَاءَ اللَّهِ | ب |

# 5: اِلاخفاء

(ಅವ್ಯಕ್ತ ಗೊಳಿಸಿ ರಾಗದೊಂದಿಗೆ ಓದುವುದು):- ಸುಕೂನ್ ಆದ ನೂನ್ ಅಥವಾ ತನ್ವೀನ್ ನ ನಂತರ ಈ 15 ಅಕ್ಷರಗಳಲ್ಲಿ ಯಾವುದಾದರೂ ಒಂದು ಬಂದರೆ; ನೂನನ್ನು ಅಥವಾ ತನ್ವೀನ್ ಅನ್ನು ಅವ್ಯಕ್ತ (Hide) ಮಾಡಿ. ನಂತರ ಇರುವ ಅಕ್ಷರವನ್ನು ಉಚ್ಚರಿಸಬೇಕು ಅದರೊಂದಿಗೆ ಸ್ವಲ್ಪ ಮೂಗನ್ನು ಉಪಯೋಗಿಸಿ ಗಣೆಕರಿಸಿ ಉಚ್ಚರಿಸಬೇಕು.

**ಉದಾಹರಣೆ:**

| ತನ್ವೀನ್‌ನ ಉದಾಹರಣೆ | ಸುಕೂನ್ ಇರುವ ನೂನ್ | |
|---|---|---|
| عَدْنٍ تَجْرِي | فَأَنتَ لَهُ تَصَدَّى | ت |
| قَوْلاً ثَقِيلاً | فَأَمَّا مَن ثَقُلَتْ | ث |
| حُبّاً جَمّاً | فَأَنجَيْنَاهُ | ج |
| قِنْوَانٌ دَانِيَةٌ | وَمَا مِن دَآبَّةٍ | د |
| سِرَاعاً ذَلِكَ | مَنْ ذَا الَّذِي | ذ |
| نَفْساً زَكِيَّةً | فَإِن زَلَلْتُمْ | ز |
| قَوْلاً سَدِيداً | مِّن سِجِّيلٍ | س |

| | | |
|---|---|---|
| ش | وَانْشَقَّ الْقَمَرُ | لِنَفْسٍ شَيْئاً |
| ص | كَانَ مَنْصُوراً | عَمَلاً صَالِحاً |
| ض | خَلَقَكُمْ مِّن ضَعْفٍ | قُوَّةٍ ضَعْفاً |
| ط | وَمَا يَنطِقُ | حَلاَلاً طَيِّباً |
| ظ | يَنظُرُونَ | ظِلاًّ ظَلِيلاً |
| ف | فَتَنْفَعَهُ الذِّكْرَى | يَتِيماً فَآوَى |
| ق | وَمَن قُدِرَ عَلَيْهِ | ثَمَناً قَلِيلاً |
| ك | أَفَمَن كَانَ مُؤْمِناً | أَجْرٌ كَرِيمٌ |

# ದೀರ್ಘ (المد)

## ಇಲ್ಮ್ ತಜ್ವೀದ್ ನಲ್ಲಿ ದೀರ್ಘವನ್ನು (المد)ಎರಡಾಗಿ ವಿಂಗಡಿಸಬಹುದು



المد الفَرعِي
(ಅಸಾಮಾನ್ಯ ದೀರ್ಘ)

المد الأَصلِي
(ಸಮಾನ್ಯ ದೀರ್ಘ)

## ಸಮಾನ್ಯ ದೀರ್ಘ: المد الأَصلِي

ದೀರ್ಘಾಕ್ಷರವನ್ನು ಉಚ್ಚಾರಣೆಯಲ್ಲಿ ತರಲು ಅಗತ್ಯ ವಿರುವಷ್ಟು ಸಮಯ ದೀರ್ಘ ನೀಡುವುದಕ್ಕೆ ಸಮಾನ್ಯ ದೀರ್ಘ المد الأَصلِي ಎಂದು ಹೇಳುವುದು.

ಉದಾ:- قَالَ ಇದರಲ್ಲಿ (ا) ಅಲಿಫನ್ನು ಉಚ್ಚರಿಸಲು ಪಡೆದು ಕೊಳ್ಳುವ ಸಮಯ

يَقُولَ ಇದರಲ್ಲಿ (و) ಇದಕ್ಕೆ ಉಂಟಾಗುವ ದೀರ್ಘವಾಗಿದೆ.

**ಎರಡು ಹರ್ಕತ್ ಉಚ್ಚರಿಸುವಷ್ಟು ಅಥವಾ ಒಂದು ಅಲಿಫ (ا)ನ್ನು ಓದುವ ಸಮಯದಷ್ಟು ದೀರ್ಘ ವನ್ನು ನೀಡಬೇಕು.ಅದಕ್ಕಿಂತ ಕಡಿಮೆಯೋ,ಅದಕ್ಕಿಂತ ಅಧಿಕವೋ ನೀಡಬಾರದು.ಹಾಗೆ ನೀಡುವುದು ಶಿಕ್ಷಾರ್ಹವಾಗಿದೆ.**

-----

## (ಅಸಾಮಾನ್ಯ ದೀರ್ಘ) المد الفَرعِي

ಸಮಾನ್ಯ ದೀರ್ಘಕ್ಕಿಂತ ಹೆಚ್ಚಾಗಿ ದೀರ್ಘ ಮಾಡಬೇಕಾದರೆ ಕಾರಣಗಳು ಇರಬೇಕು.
"ಹೀಗೆ ಕಾರಣಾಂತರಗಳಿಂದ ಅಧಿಕ ದೀರ್ಘ ನೀಡುವುದಾದರೆ ಆ ದೀರ್ಘಕ್ಕೆ ಅಸಾಮಾನ್ಯ ದೀರ್ಘ المد الفَرعِي ಎನ್ನಲಾಗುವುದು."

[ದೀರ್ಘ ಅಕ್ಷರಗಳಾದ ಆಲಿಫ್ ,[ا] ವಾವ್ [و],ಯಾಅ್ [ي]ನ ನಂತರ ಹಮ್ಝ [ء]ಅಥವಾ ಸುಕುನ್ ಬರುವಾಗ ಆಗಿದೆ ಅಸಾಮಾನ್ಯ ದೀರ್ಘ [المد الفَرعِي]ಉಂಟಾಗುವುದು.

ಅಸಮಾನ್ಯ ದೀರ್ಘ [المد الفَرعِي]ವನ್ನು 5 ಆಗಿ ವಿಂಗಡಿಸಬಹುದು:



المد المتَصِل :1    2: المد المنفَصِل    3: المد اللازم    4: المد العارض    5: المد اللِين

**1: المد المتَصِل:**

**ದೀರ್ಘ (مد) ಅಕ್ಷರದ ನಂತರ ಅದೇ ಪದದಲ್ಲಿ ಹಮ್ಝ್ (ء)ಎಂಬ ಅಕ್ಷರ ಬಂದರೆ, ಅಲ್ಲುಂಟಾಗುವ (مد)ದೀರ್ಘ ಕ್ಕೆ ಹೇಳುವುದಾಗಿದೆ ಮದ್ದ್ ಮುತ್ತಸಿಲ್.**

**ಉದಾ: إِذَا جَاءَ**

**ಉದಾಹರಣೆಯಲ್ಲಿ ಜಿಮ್ [ج]ನ ಬಳಿಕ ದೀರ್ಘ ದ ಸಂಕೇತವಿದೆ (ا ಅಕ್ಷರದಲ್ಲಿ ) ನಂತರದ ಅಕ್ಷರ ಹಮ್ಝ್ [ء]ಆಗಿದೆ.**

**ನಿಯಮ:**

**ಇಲ್ಲಿ 7"ಹರ್ಕತ್" ನ ಖದ್ರ್ ಅಂದರೆ 3 ಮತ್ತು ಅರ್ಧ ಅಲಿಫ್ ಉಚ್ಚರಿಸುವಷ್ಟು ಸಮಯ ದೀರ್ಘ ಕೊಡುವುದು ಕಡ್ಡಾಯ ವಾಗಿದೆ.**

---

**2:المد المنفَصِل**

**"ಒಂದು ಪದದ ಕೊನೆಯಲ್ಲಿ ಮದ್ದ್ (ದೀರ್ಘ) ಅಕ್ಷರವೂ ನಂತರ ಬರುವ ಪದದ ಆರಂಭದಲ್ಲಿ "ಹಮ್ಝ್" [ء]ಬಂದರೆ ; [ಅಂದರೆ: ಮದ್ದ್ (ದೀರ್ಘ) ಅಕ್ಷರ ಮತ್ತು ಹಮ್ಝ್ ಎರಡು ಪದಗಳಲ್ಲಿ ಬಂದರೆ] ಅಲ್ಲಿಂಟಾಗುವ ಮದ್ದ್ (ದೀರ್ಘ) ಗೆ ಇರುವ ನಾಮವಾಗಿದೆ ಮದ್ದ್ ಮುನ್ಫಸಿಲ್.**

**ಉದಾ: تُوبُوا إِلَى اللَّهِ**

**ಉದಾಹರಣೆಯಲ್ಲಿನ ಆದ್ಯ ಪದದಲ್ಲಿ ನ ಕೊನೆಯ ಅಕ್ಷರವೂ ಮದ್ದ್ (ದೀರ್ಘ) ಅಕ್ಷರ ವಾಗಿದ್ದು ನಂತರದ ಆರಂಭಿಕ ಪದವು ಹಮ್ಝ್ ಆಗಿದೆ.**

**ನಿಯಮ:**

**ಇಲ್ಲಿ ಸಮಾನ್ಯ ದೀರ್ಘಕ್ಕಿಂತ ಅಧಿಕ ದೀರ್ಘಿಸಲು ನಿರ್ಬಂಧವಿಲ್ಲ. ಆದರೆ 7 ಹರ್ಕತ್ ನಷ್ಟು ದೀರ್ಘ ಕೊಡಬಹುದು ಅಂದರೆ ಮೂರುವರೆ ಅಕ್ಷರ.**

## المد العارض:3

ದೀರ್ಘ ಅಕ್ಷರ ದ ನಂತರ ವಖ್ಫಿನ (Stop) ಸಂಧರ್ಭದಲ್ಲಿ ಸುಕೂನ್ ನೀಡುವ ಮೂಲಕ ಉಂಟಾಗುವಂತಹ ದೀರ್ಘ ಕ್ಕೆ ಇರುವ ನಾಮವಾಗಿದೆ ಮದ್ದ್ ಆರಿಲ್.

[ಈ ಸುಕೂನ್ ಮುಂದುವರಿಸಿ (ಚೆರ್ತಿ ಓದುಂಬೋಳ್) ಇಲ್ಲದ್ದೂ ವಖ್ಫಿನ ಸಂಧರ್ಭದಲ್ಲಿ ಹೊಸದಾಗಿ ಉಂಟಾಗುವ ಸುಕೂನ್ ಆಗಿದೆ.]

ಉದಾ: يَوْمِ الدِّينِ

ಉದಾಹರಣೆಯ الدِّينِ ಎಂಬುದರ ಕೊನೆಯಾಕ್ಷರಕ್ಕೆ ವಖ್ಫಿನ ಸಂಧರ್ಭದಲ್ಲಿ ಸುಕೂನ್ ಉಂಟಾಗುತ್ತದೆ.

ನಿಯಮ:

ಇಲ್ಲಿ 6 ಹರ್ಕತ್ (3 ಅಕ್ಷರ) ನ ಖದ್ರ್ ದೀರ್ಘಿಸುವುದು ಉತ್ತಮ ವಾಗಿದೆ. ಆದರೆ, ನಿರ್ಬಂಧವಿಲ್ಲ.

---

## 4: المد اللِين

ಹರ್ಕತ್ ಫತ್ಹ್ ನ ನಂತರ ಸುಕೂನ್ ಆಗಿ ಬರುವ ವಾವ್ , [و]ಯಾಅ್ [ي]ಆಗಿದೆ ಲೀನಾಕ್ಷರ.

ಸುಕೂನ್ ಇರುವ "ي" "و"ಹಾಗೂ ಇದಕ್ಕೂ ಮೊದಲು ಹರ್ಕತ್ ಫತ್ಹ್ ಬಂದರೆ ವಖ್ಫಿನ ಸಂಧರ್ಭದಲ್ಲಿ ಅಲ್ಲಿ ಮದ್ದ್ ಲೀನ್ ಉಂಟಾಗುತ್ತದೆ.

ಉದಾ:- قُرَيْشٍ

ನಿಯಮ: ಇಲ್ಲಿ 6 ಹರ್ಕತ್ ನಷ್ಟು ದೀರ್ಘಿಸಬಹುದಾದರೂ, 2 ಹರ್ಕತ್ ನಷ್ಟು ದೀರ್ಘ ಮಾಡುವುದು

---

## 5- المد اللازم

ಮದ್ದ್ (ದೀರ್ಘ) ಅಕ್ಷರದ ನಂತರ ಅದೇ ರೀತಿ ಲೀನ್ [ ي & ا ಮುಂಚಿನ ಅಕ್ಷರ ಫತ್ಹ್] ಪರ್ಮನೆಂಟ್ ಆದ ಸುಕೂನ್ ಬಂದರೆ

[ವಖ್ಫಿನಲ್ಲಿ ಮಾತ್ರ ಬರುವ ಸುಕೂನ್ ಅಲ್ಲ ಅಂದರೆ; ಮುಂದುವರೆಸಿ ಓದುವಾಗಲೂ, ವಖ್ಫ್ ಗೈಯ್ಯುವಾಗಲೂ ಉಂಟಾಗುವ ಸುಕೂನ್ ಆಗಿದೆ ಸ್ಥಿರವಾದ ಸುಕೂನ್.]

ಅಲ್ಲಿ ನಾವು ನೀಡುವಂತಹ ದೀರ್ಘಕ್ಕೆ ಇರುವ ನಾಮವಾಗಿದೆ ಮದ್ದ್ ಲಾಝಿಮ್.

★ ಈ ಸುಕೂನ್ ಬರುವುದು ಪದಗಳಲ್ಲಾದರೆ ಅದಕ್ಕೆ ಕಲಿಮಿಯ್ಯ್ [كَلِمِي]ಎಂದೂ..

★ ಅಕ್ಷರ ಗಳಲ್ಲಾದರೆ ಹರ್ಫಿಯ್ಯ್" [حَرفِي]ಎಂದೂ ಕರೆಯಲ್ಪಡಲಾಗುತ್ತದೆ.

★ ಅದೇ ರೀತಿ: ಈ ಕಲೀಮಿಯ್ಯ್" [كَلِمِي]ಮತ್ತು ಹರ್ಫಿಯ್ಯ್" [حَرفِي](ಪದಗಳಲ್ಲಿ ಹಾಗೂ ಅಕ್ಷರ ಗಳಲ್ಲಿ ಬರುವ ಸುಕೂನ್)

ಈ ಸುಕೂನ್ ಇರುವ ಅಕ್ಷರ ಬೇರೊಂದು ಅಕ್ಷರ ದೊಂದಿಗೆ ( ادغام) ಸೇರುವುದು.ಆದರೆ, ಅದನ್ನು مثَقَل ಎಂದೂ..

ಸೇರುವುದಿಲ್ಲ (ادغام)ವಾದರೆ ಮುಖಫಫ್ (مخَفَف)ಎಂದೂ ಹೇಳುತ್ತೇವೆ.

ಈ ರೀತಿ ಹೇಳುವಾಗ ಮದ್ದ್ ಲಾಝಿಮನ್ನು "4" ವಿಧಗಳಾಗಿ ವಿಂಗಡಿಸಬಹುದು.




ವಿವರಣೆ:

**1: كَلِمِي مثَقَل**

ಮುಸಕ್ಕಲ್ ಅಂದರೆ ಸೇರಿಸುವುದು (ادغام)ಇದೆ ಎಂಬುವುದಾಗಿದೆ.

ಉದಾ:- الْحَاقَّةُ

ಈ ಉದಾಹರಣೆಯನ್ನು ಬಿಡಿಸಿ ಓದುವುದಾದರೆ الحاققتಎಂದಾಗುತ್ತದೆ.

ಇಲ್ಲಿ ಮೊದಲನೇ " ق"ಅನ್ನು ಎರಡನೇ " ق"ಗೆ ಸೇರಿಸಿದಾಗ [ادغام]ಅಲ್ಲಿ ಒಂದು ದೀರ್ಘ ಬಂತು. ಅದೇ ರೀತಿ ಯಲ್ಲಿ ಅಲ್ಲಿ ಮುಸಕ್ಕಲ್ [مثَقَل]ಆಯಿತು. ಇದೊಂದು ಪದವಾದ ಕಾರಣ ಅಲ್ಲಿ ಕಲಿಮಿಯ್ಯ್ [كَلِمِي]ಆಯಿತು. ಅಂದರೆ ಕಲಿಮಿಯ್ಯ್ ಮುಸಕ್ಕಲ್.

## 2.كلمي مخفف

ಉದಾ:- الان

ಇಲ್ಲಿ ಸೇರಿಸುವಿಕೆ [ادغام]ಇಲ್ಲದ ಕಾರಣ ಇದು ಮುಖಫ್ಫಫ್ (مخفف)ಆಗಿದೆ. ಇದು ಒಂದು ಪದವಾದ ಕಾರಣ ಕಲಿಮಿಯ್ಯ್ (كلمي)ಆಯಿತು ಅಂದರೆ ಕಲಿಮಿಯ್ಯ್ ಮುಖಫ್ಫಫ್.

---

## 3:حرفي مثَقَل

ಉದಾ:- الم

ಈ ಉದಾಹರಣೆ ಯಲ್ಲಿ ಎರಡನೇ ಅಕ್ಷರ ವಾದ ಲಾಮ್ [ل] ನಲ್ಲಿರುವ (لام) ಮೀಮ್"ಅನ್ನೂ 3 ನೇ ಅಕ್ಷರ ವಾದ ಮೀಮ್ (م) ನಲ್ಲಿರುವ ಮೀಮ್"(ميم)ಅನ್ನು ಸೇರಿಸಿ ادغام(ಒಂದು ಅಕ್ಷರ ವನ್ನಾಗಿ ಮಾಡಿ) ಉಚ್ಚಾರಣೆ ಮಾಡುತ್ತೇವೆ. ಅದ್ದರಿಂದಲೇ ಇದನ್ನು ಹರ್ಫಿಯ್ಯ್ ಮುಸಕ್ಕಲ್ [حرفي مثَقَل]ಎಂದು ಹೇಳುತ್ತೇವೆ.

---

## 4:حرفي مخفف

ಉದಾ:- ”حم“

ಉದಾಹರಣೆಯಲ್ಲಿ ಯಾವುದೇ ರೀತಿಯ ಸೇರಿಸುವಿಕೆ [ادغام]ಇಲ್ಲದ ಕಾರಣ ಮಾತ್ರವಲ್ಲ. ಇದು ಅಕ್ಷರ ವಾದ ಕಾರಣ ಇದನ್ನು ಹರ್ಫಿಯ್ಯ್ ಮುಖಫ್ಫಫ್ ಎಂದು ಕರೆಯುತ್ತೇವೆ.

---

## ಮುಖ್ಯಾಂಶಗಳು: ಯಾವ ಅಕ್ಷರಕ್ಕೆ ಎಷ್ಟೆಷ್ಟು ದೀರ್ಘ ಕೊಡಬೇಕು.

★ ಪದಗಳಲ್ಲಾದರೆ: 6 ಹರ್ಕತ್ ನಷ್ಟು (3 ಅಲಿಫ್) ದೀರ್ಘ.

★ ಅಕ್ಷರ ಗಳಲ್ಲಾದರೆ ಒಂದೊಂದು ವ್ಯಾತ್ಯಾಸ್ಥವಾದ ದೀರ್ಘ ವಾಗಿದೆ ಇರುವುದು.

(ا)ಅಲಿಫ್: ದೀರ್ಘ ಇಲ್ಲ.

[ح ي ط ه ر] حي طهر : 2 ಹರ್ಕತ್ (1 ಅಲಿಫ್) ನಷ್ಟು ದೀರ್ಘ ನೀಡಬೇಕು.

[س ن ق ص ل ك م] سنقص لكم : "6" ಹರ್ಕತ್ (3 ಅಲಿಫ್) ನಷ್ಟು ದೀರ್ಘ ನೀಡಬೇಕು

---

# بيان الهاءات ( هَاء ನ ನಿಯಮಗಳು)

هَاءُ الضَّمِير، هَاءُ التَّأنِيث، هَاء السَّكتَ

ಹೀಗೆ هَاء ಗಳು ಮೂರು ವಿಧಗಳಾಗಿವೆ.

| | | |
|---|---|---|
| هَاءُ الضَّمِير: | بِيَدِه مَلَكُوتُ كُلِّ شَيْءٍ | نُصْلِيه نَارًا |
| | وَإِنَّهُ لَلْحَقُّ مِنْ رَبِّكَ ، | عَنْهُ تَلَهَّى |

ಈ ಮೇಲಿನ ಉದಾಹರಣೆ ನೋಡಿ.ಅವುಗಳಲ್ಲಿ هَاء ಇರುವುದು ಕಾಣಬಹುದು. ಒಂದನೇ ಸಾಲಿನಲ್ಲಿರುವ عَنْهُ / بِيَدِه / إِنَّهُ / نُصْلِيه ಇತ್ಯಾದಿ. ಪದಗಳಲ್ಲಿರುವ ಅವನು,ಅದು ಎಂಬ ಅರ್ಥ ಬರುವ ಅಕ್ಷರವಾಗಿದೆ. ಇದಕ್ಕೆ هَاءُ الضَّمِير ಎಂದು ಹೆಸರು.

ನಿಯಮ:

★ ಇದರ هَاء ಹಿಂದಿನ ಮತ್ತು ಮುಂದಿನ ಅಕ್ಷರಕ್ಕೆ ಹರ್ಕತ್ ಇದ್ದರೆ ಈ هَاء ಅನ್ನು ಎರಡು ಹರ್ಕತ್ ನಷ್ಟು ದೀರ್ಘ ನೀಡಿ ಓದಬೇಕು.

★ ಮುಂದೆ ಅಥವಾ ಹಿಂದೆ ಸುಕೂನ್ ಇದ್ದರೆ ದೀರ್ಘಿಸಬಾರದು.

ಸೂಚನೆ:

يَخْلُدْ فِيهِ مُهَانًا ಎಂಬಲ್ಲಿನ هَاء ಅನ್ನು ದೀರ್ಘಿಸಿಯೂ..

يَرْضَهُ لَكُمْ ಎಂಬಲ್ಲಿರುವ هَاء ಅನ್ನು ದೀರ್ಘಿಸದೆಯೂ ಓದಬೇಕು.

---

هَاءُ التَّأنِيث:

ಇದು ಪದಗಳನ್ನು ಸ್ತ್ರೀ ಲಿಂಗ ಮಾಡಲು ಬೇಕಾಗಿ ಸೇರಿಸುವಂತದಾಗಿದೆ. ಇದಕ್ಕೆ ಎಂದು هَاءُ التَّأنِيث ಹೇಳಲಾಗುವುದು. ಸೇರಿಸಿ ಓದುವಾಗ تَاء ಆಗಿಯೂ. ನಿಲ್ಲಿಸುವಾಗ (وقف) ಮಾಡುವಾಗ هَاء ಆಗಿಯೂ ಉಚ್ಚರಿಸಬೇಕು.

**ಉದಾಹರಣೆ:-**

| | |
|---|---|
| **فِي عِيشَةٍ رَّاضِيَةٍ** | **فِي جَنَّةٍ عَالِيَةٍ** |

هَاءَ السّكتَ :

**ಸೇರಿಸಿ ಓದುವಾಗ ಶ್ವಾಸ ಬಿಡದೆ ಇಲ್ಲಿ ತುಸು ಹೊತ್ತು ನಿಲ್ಲಿಸಿ ಮುಂದುವರಿಸಬೇಕು.**

**ಈ** هَاء **ಗೆ ಸುಕೂನ್ ಆಗಿರುತ್ತದೆ.**

**ಉದಾಹರಣೆ:-**

| | |
|---|---|
| **اقْتَدِهْ** | **لَمْ يَتَسَنَّهْ** |
| **سُلْطَانِيَهْ** | **مَالِيَهْ** |

هَاءُ الضَّمِير، هَاءُ التَّأنِيث، هَاءُ السَّكتَ

**ಹೀಗೆ ಮೂರರಲ್ಲೂ (ನಿಲ್ಲಿಸು) ಮಾಡುವಾಗ ಸುಕೂನ್ ಮಾಡಬೇಕು.**

**--------------------**

# الوقف (ನಿಲ್ಲಿಸುವುದು)

وَبَشِّرِ الَّذِينَ آمَنُوا وَعَمِلُوا الصَّالِحَاتِ أَنَّ لَهُمْ جَنَّاتٍ تَجْرِي مِنْ تَحْتِهَا الْأَنْهَارُ كُلَّمَا رُزِقُوا مِنْهَا مِنْ ثَمَرَةٍ رِزْقًا قَالُوا هَذَا الَّذِي رُزِقْنَا مِنْ قَبْلُ وَأُتُوا بِهِ مُتَشَابِهًا وَلَهُمْ فِيهَا أَزْوَاجٌ مُطَهَّرَةٌ وَهُمْ فِيهَا خَالِدُونَ (25) إِنَّ اللَّهَ لَا يَسْتَحْيِي أَنْ يَضْرِبَ مَثَلًا مَا بَعُوضَةً فَمَا فَوْقَهَا فَأَمَّا الَّذِينَ آمَنُوا فَيَعْلَمُونَ أَنَّهُ الْحَقُّ مِنْ رَبِّهِمْ وَأَمَّا الَّذِينَ كَفَرُوا فَيَقُولُونَ مَاذَا أَرَادَ اللَّهُ بِهَذَا مَثَلًا يُضِلُّ بِهِ كَثِيرًا وَيَهْدِي بِهِ كَثِيرًا وَمَا يُضِلُّ بِهِ إِلَّا الْفَاسِقِينَ (26)

**ಖುರ್ ಆನ್ ನಲ್ಲಿ 114 ಸೂರಃಗಳಿವೆ. ಪ್ರತೀ ಸೂರಃ ಗಳಲ್ಲಿ ಹಲವು ಆಯತ್ ಗಳೂ ಇವೆ. ಸೂರತುಲ್ ಬಖರ ದ ಎರಡು ಆಯತ್ ಗಳನ್ನು ಮೇಲೆ ಕೊಡಲಾಗಿದೆ. ಒಂದನೇ ಆಯತ್** خَالِدُونَ **ಎಂಬ ಪದದೊಂದಿಗೆ ಕೊನೆಗೊಳ್ಳುತ್ತದೆ. ಅಲ್ಲಿಯ ತನಕ ಸೇರಿಸಿ ಓದಬೇಕು. ಆದರೆ ನಮ್ಮಲ್ಲಿ ಹಲವು ಮಂದಿಗೆ ಒಂದೇ ಶ್ವಾಸದಲ್ಲಿ ಓದಲು ಸಾಧ್ಯ ವಾಗುವುದಿಲ್ಲ. ಶ್ವಾಸವನ್ನು ಬಿಡಲು ಮಧ್ಯೆ ನಿಲ್ಲಿಸಬೇಕಾಗುವುದು. ಮಧ್ಯೆ ಅಥವಾ ಕೊನೆಯಲ್ಲಿ ಶ್ವಾಸವನ್ನು ಬಿಡಲಿಕ್ಕಾಗಿ ಓದು ನಿಲ್ಲಿಸುವುದಕ್ಕೆ ವಖ್ಫ್ ಎಂದು ಹೆಸರು. ಅರ್ಥ ಪೂರ್ಣಗೊಳ್ಳದ ಸ್ಥಳದಲ್ಲಿ ವಖ್ಫ್ ಮಾಡಬಾರದು. ಮಾಡಿದರೆ ಮುಂಚಿನ ಪದದೊಂದಿಗೆ ಸೇರಿಸಿ ಓದಬೇಕು.**

ಆದುದರಿಂದಲೇ ವಕ್ಫ್ ಅನ್ನು ಕಲಿಯದವನು ಖುರ್ ಆನ್ ಕಲಿತಿಲ್ಲ ಎಂದು ಇಮಾಮ್ ಅಬೂ ಹಾತಿಮುಸ್ಸಜಸ್ತಾನೀ ರಹ್ಮತುಲ್ಲಾಹಿ ಅಲೈಹಿ ಹೇಳಿದ್ದು.

وَرَتِّلِ القرآن تَرْتِيلاً

ಎಂಬ ಆಯತಿಗೆ ಅಲೀ ರಳಿಯಲ್ಲಾಹು ಅನ್ಹು ಅರ್ಥ ಕೊಟ್ಟದ್ದು ಅಕ್ಷರಗಳನ್ನು ಅಲಂಕರಿಸುವುದೂ ವಕ್ಫ್ ಕಲಿಯುವುದು ಎಂದಾಗಿದೆ.

---

وَصل، وَقف، سَكت، قَطع

ಎಂಬಿ ನಾಲ್ಕು ಅವಸ್ಥೆಗಳಾಗಿವೆ ಕಿರಾಅತ್‌ಗೆ ಇರುವುದು.

*ಶಬ್ದ ಮುರಿಸದೆ ಪದಾನುಪದ ಸೇರಿಸಿ ಓದುವುದಾಗಿದೆ .وَصل

ಮುಂದುವರೆಸಿ ಓದಬೇಕು ಎಂಬ ಉದ್ದೇಶದೊಂದಿಗೆ ಶ್ವಾಸ ಬಿಟ್ಟು ನಿಲ್ಲಿಸುವುದಾಗಿದೆ .وَقف

*ಶ್ವಾಸ ಬಿಡದೆ ತುಸು ಓದು ನಿಲ್ಲಿಸಿ ಮುಂದೆ ಓದುವುದಾಗಿದೆ سَكت

*ಓದುವುದರಿಂದ ವಿರಮಿಸುವುದಕ್ಕೆ قَطع ಎಂದು ಕರೆಯಲಾಗುತ್ತದೆ. قَطعಗೈದ ಬಳಿಕ ಓದುವುದಾದರೆ ಅವೂದ್ಸು..ಬಿಸ್ಮಿ..ಓದಲು ಸುನ್ನತ್ತಿದೆ.

ಖುರ್ ಆನ್ ನಲ್ಲಿ ಎಲ್ಲೂ ವಕ್ಫ್ ಗೈಯ್ಯಲು ಹರಾಮ್ - ವಾಜಿಬ್ ಎಂದಿಲ್ಲ. ಆದರೆ, ಕೇಳುಗನಿಗೆ ತಪ್ಪು ಧಾರಣೆ ಬರಲು ಬೇಕಾಗಿ ಮನ ಪೂರ್ವಕವಾಗಿ ಮಾಡುವಿಕೆಯೂ ಹರಾಮ್ ಆಗಿದೆ.

---

ಆಯತ್ ಗಳ ಮಧ್ಯೆ ಹಲವು ಗುರುತುಗಳು ಇವೆ. ಅವುಗಳಲ್ಲಿ ಕೆಲವೊಂದು ಇಂತಿವೆ:

| | |
|---|---|
| ವಕ್ಫ್ ಮಾಡುವುದು ಬಲವಾದ ಸುನ್ನತ್ | مـ |
| ವಕ್ಫ್ ಮಾಡಬಾರದು | لا |
| ಸೇರಿಸಿ ಓದುವುದು ಉತ್ತಮ | صلے |
| ವಕ್ಫ್ ಅತ್ಯುತ್ತಮ | قلے |
| ವಕ್ಫ್ ಸಮ್ಮತಾರ್ಹ | ج |
| ವಕ್ಫ್ ಉತ್ತಮ | ط |
| ವಕ್ಫ್ ಮಾಡಬಾರದೆಂಬ ಅಭಿಪ್ರಾಯ ಇದೆ. | ق |
| ಎರಡೂ ಆಗಬಹುದು. ಸೇರಿಸಿ ಓದುವುದು ಉತ್ತಮ | ز |
| ಶ್ವಾಸ ಬಿಡದೆ ತುಸು ಓದು ನಿಲ್ಲಿಸುವುದು | س |
| ಎರಡರ ಪೈಕಿ ಒಂದು ಕಡೆ ನಿಲ್ಲಿಸಬಹುದು | .•. .•. |
| ದೀರ್ಘ ದ ಸಂಕೇತ | ~ |